

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1171 |
| 2 | ಮಾನ್ಯ ಸದಸ್ಯರ ಹೆಸರು | ಶ್ರೀ ಸಲೀಂ ಅಹ್ಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 07/03/2022 |
| 4 | ಉತ್ತರಿಸಬೇಕಾದ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾವೇರಿಯಲ್ಲಿ, ನಿರ್ಮಾಣವಾಗುತ್ತಿರುವ ಮೆಡಿಕಲ್ ಕಾಲೇಜು ಕಟ್ಟಡದ ಕಾಮಗಾರಿಯು ಇದುವರೆವಿಗೂ ಪೂರ್ಣಗೊಳ್ಳದೆ ಮಂದಗತಿಯಲ್ಲಿ ಸಾಗಲು ಕಾರಣವೇನು; | ಕೇಂದ್ರ ಪುರಸ್ಕೃತ ಯೋಜನೆಯಡಿ ರಾಜ್ಯದ ಹಾವೇರಿ, ಜಿಲ್ಲೆಯಲ್ಲಿ ವೈದ್ಯಕೀಯ ವಿಜ್ಞಾನ ಸಂಸ್ಥೆಯನ್ನು 2021-22 ನೇ ಸಾಲಿನಿಂದ ಪ್ರಾರಂಭಿಸಲು ಅನುಮತಿ ನೀಡಲಾಗಿದೆ.<br><br>ಹಾವೇರಿ ವೈದ್ಯಕೀಯ ಕಾಲೇಜು ಕಟ್ಟಡ, ವಸತಿ ನಿಲಯ, ಆಸ್ಪತ್ರೆ, ಹಾಗೂ ಇನ್ನಿತರೆ ಕಟ್ಟಡ ಕಾಮಗಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಂಇಡಿ 524 ಎಂಎಂಸಿ 2019 ದಿನಾಂಕ 08/09/2020 ರಲ್ಲಿ ರೂ 327.46 ಕೋಟಿಗಳ ಟೆಂಡರ್ ಮೊತ್ತಕ್ಕೆ ಅನುಮೋದನೆಯನ್ನು ನೀಡಲಾಗಿದೆ.<br><br>ಹಾವೇರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಕಟ್ಟಡ ಕಾಮಗಾರಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರದ ಪಾಲು ಸೇರಿ ಸರ್ಕಾರದ ಆದೇಶ ಸಂಖ್ಯೆ: ಎಂಇಡಿ 417 ಎಂಎಂಸಿ 2020 ರಲ್ಲಿ ವಿವಿಧ ದಿನಾಂಕಗಳಂದು ಇದುವರೆವಿಗೂ ಒಟ್ಟು ರೂ. 292.54 ಕೋಟಿಗಳ ಅನುದಾನವನ್ನು ಒದಗಿಸಲಾಗಿರುತ್ತದೆ.<br><br>ಸದರಿ ಕಾಲೇಜಿನ ಕಟ್ಟಡ ಕಾಮಗಾರಿ ಕೈಗೊಳ್ಳುವ ಸಂದರ್ಭದಲ್ಲಿ ಕೋವಿಡ್-19 ಅಲೆಗಳ ಪರಿಣಾಮವಾಗಿ ಕಾಮಗಾರಿ ನಿರ್ವಹಿಸುವ ನುರಿತ ಕೆಲಸಗಾರರು ಲಭ್ಯವಾಗಿರಲಿಲ್ಲ, ಹಾಗೂ 2020-21 ನೇ ಸಾಲಿನಲ್ಲಿ ಸುರಿದ ಬಾರಿ ಮಳೆಯಿಂದಾಗಿ ಕಾಮಗಾರಿಗೆ ಉಪಯೋಗಿಸುವ ಸಾಮಾಗ್ರಿಗಳ ಪೂರೈಕೆಯಲ್ಲಿ ಆದಂತಹ ವ್ಯತ್ಯಯದಿಂದ ಕಾಮಗಾರಿ ಮಂದ ಗತಿಯಲ್ಲಿ ಸಾಗಿತ್ತು, ಆದರೆ ಪ್ರಸ್ತುತದಲ್ಲಿ ಕಾಮಗಾರಿಯು ತೀವ್ರಗತಿಯಲ್ಲಿ ಸಾಗಿದ್ದು, ಮಾರ್ಚ್-2023 ರೊಳಗಾಗಿ ಪೂರ್ಣಗೊಳಿಸುವ ಗುರಿ ಹೊಂದಿದೆ. |
| ಆ) | ಶೇಕಡ 30 ರಷ್ಟು ಕಾಮಗಾರಿಯು ಮುಗಿದಿದ್ದು, ಇನ್ನು ಕಟ್ಟಡವು ಯಾವಾಗ ಪೂರ್ಣಗೊಳ್ಳುವುದು. | |
| ಇ) | 2021-22 ನೇ ಸಾಲಿನ ಮೆಡಿಕಲ್ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಇಂಜಿನಿಯರಿಂಗ್ ಕಾಲೇಜು ಕ್ಯಾಂಪಸ್‌ನಲ್ಲಿ ನೀಡುವುದಾಗಿ ಸರ್ಕಾರವು ಘೋಷಿಸಿದ್ದರೂ | NMC ಯ MARB ಯು ಕೆಲವು ಮೂಲಭೂತ ಸೌಕರ್ಯ, ಮಾನವ ಸಂಪನ್ಮೂಲ ಮತ್ತಿತರ ಅಂಶಗಳಲ್ಲಿನ ಕೊರತೆಯ ಕಾರಣದಿಂದಾಗಿ ಹಾವೇರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ LOP ನೀಡಿರುವುದಿಲ್ಲ. ಸದರಿ ವೈದ್ಯಕೀಯ ಕಾಲೇಜನ್ನು |

| | | |
|---|---|---|
| | ಇದುವರೆವಿಗೂ ವಿದ್ಯಾರ್ಥಿಗಳಿಗೆ ಪ್ರವೇಶ ನೀಡದಿರಲು ಕಾರಣವೇನು? | 2021-22 ನೇ ಸಾಲಿನಿಂದ ಪ್ರಾರಂಭಿಸಲು ಅನುಮತಿಯನ್ನು ನೀಡುವಂತೆ National Medical Commission ನ Medical Assessment & Rating Board (MARB) ಗೆ ದಿನಾಂಕ 13/10/2021 ರಂದು ಸರ್ಕಾರದಿಂದ ಪತ್ರ ಬರೆಯಲಾಗಿತ್ತು. ಆದರೆ ಸದರಿ ಕಾಲೇಜನ್ನು 2021-22 ನೇ ಸಾಲಿನಿಂದ ಪ್ರಾರಂಭ ಮಾಡಲು MARB ಯಿಂದ ಅನುಮತಿ ಪತ್ರ (Letter of Permission) ನೀಡಿರುವುದಿಲ್ಲ. ಆದುದರಿಂದ ವಿದ್ಯಾರ್ಥಿಗಳ ಪ್ರವೇಶಾತಿಗೆ ಅವಕಾಶ ಕಲ್ಪಿಸಿರುವುದಿಲ್ಲ. |

ಸಂಖ್ಯೆ: ಎಂಇಡಿ 115 ಎಂಎಂಸಿ 2022

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು